ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1840 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24.03.2020 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬಂಗಾರ, ರತ್ನ, ಬೆಳ್ಳಿ ಹಾಗೂ ಇನ್ನಿತರೆ ಬೆಲೆ ಬಾಳುವ ಆಭರಣಗಳ ಗುಣಮಟ್ಟವನ್ನು ಪರೀಕ್ಷಿಸಲು ಸರ್ಕಾರದ ಮಾನದಂಡಗಳೇನು;(ಸ್ಪಷ್ಟ ಮಾಹಿತಿ ನೀಡುವುದು) | ಕರ್ನಾಟಕ ಕಾನೂನು ಮಾಪನಶಾಸ್ತ್ರ(ಜಾರಿ)(ತಿದ್ದುಪಡಿ) ನಿಯಮಗಳು 2016ರಲ್ಲಿ ಬಂಗಾರ, ರತ್ನ ಹಾಗೂ ಇನ್ನಿತರ ಬೆಲೆ ಬಾಳುವ ಆಭರಣಗಳ ಗುಣಮಟ್ಟವನ್ನು ಪರೀಕ್ಷಿಸಲು ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಿದೆ. ಸದರಿ ನಿಯಮಗಳ ನಿಯಮ 3(13)ನ್ನು ಈ ಕೆಳಗೆ ಉದ್ಧೃತಗೊಳಿಸಿದೆ.<br>(i) No weight other than a Bullion Weight as specified in the Legal Metrology(General) Rules, 2011 shall be used In any transaction in bullion trade, diamond, platinum, pearls and the like ornaments and other articles, made of gold or silver or platinum.<br>(ii) No weight other than a carat weight shall be used in any transaction in precious stones.<br>(iii) Only beam scale of Class A or Class B or a Non-automatic Weighing instrument of High Accuracy Class (Class-II) or Special Accuracy Class(Class I) having verification scale interval of 1 mg- or less than 1 mg- shall be used in any transaction referred to in sub-rules (i) and (ii).<br>ಬಂಗಾರ, ರತ್ನ, ಬೆಳ್ಳಿ ಹಾಗೂ ಇನ್ನಿತರೆ ಬೆಲೆ ಬಾಳುವ ಆಭರಣಗಳ ಗುಣಮಟ್ಟವನ್ನು ಪರೀಕ್ಷಿಸಲು ಸರ್ಕಾರವು (ಹಾಲ್ ಮಾರ್ಕ್) ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ ನಿಯಮಾವಳಿ 1987ರನ್ವಯ ಗುರುತನ್ನು ಹಾಕುತ್ತಿದೆ. ಈ ಪ್ರಮಾಣ ಪತ್ರವನ್ನು ಕೇಂದ್ರ ಸರ್ಕಾರದ ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ ಕಾಯ್ದೆ 1986ರ ನಿಯಮಗಳನ್ವಯ ನೀಡಲಾಗುತ್ತಿದೆ. |

| | | |
|---|---|---|
| (ಆ) | ಗ್ರಾಹಕರುಗಳು ಇತ್ತೀಚಿನ ದಿನಗಳಲ್ಲಿ ಆಭರಣ ಮಳಿಗೆಗಳಿಂದ ಖರೀದಿಸಿದಾಗ ವಂಚನೆಗಳಿಗೆ ಒಳಪಡುತ್ತಿರುವ ಸಂಖ್ಯೆಯು ಹೆಚ್ಚುತ್ತಿರುವುದರಿಂದ ಇಂತಹ ವಂಚನೆಗಳನ್ನು ತಡೆಗಟ್ಟುವಲ್ಲಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು; | ಗ್ರಾಹಕರ ಜಾಗೃತಿ ಕಾರ್ಯಕ್ರಮಗಳ ಮೂಲಕ ಗ್ರಾಹಕರಲ್ಲಿ ಜಾಗೃತಿ ಮತ್ತು ತೂಕದ ಸಾಧನಗಳ ನಿಖರತೆ ಕುರಿತು ಅರಿವು ಮೂಡಿಸಲಾಗುತ್ತಿದೆ.<br>ತೂಕದ ಯಂತ್ರಗಳ ನಿಖರತೆಯನ್ನು ಗ್ರಾಹಕರು ಖಚಿತಪಡಿಸಿಕೊಳ್ಳಲು ತೂಕದ ಯಂತ್ರದ ಸಾಮರ್ಥ್ಯದ 1/10ಕ್ಕೆ ಅನುಗುಣವಾಗಿ ಪ್ರಮಾಣಿಕೃತವಾದ ಪರೀಕ್ಷಾರ್ಥ ತೂಕ ಬಟ್ಟುಗಳನ್ನು (Test Weight) ವ್ಯಾಪಾರಸ್ಥರು ಇಟ್ಟುಕೊಳ್ಳಬೇಕಾಗಿರುವುದು ಕಾನೂನಿನಲ್ಲಿ ಕಡ್ಡಾಯವಾಗಿರುತ್ತದೆ.<br>ತೂಕದ ಯಂತ್ರಗಳ ಸತ್ಯಾಪನೆ ಹಾಗೂ ಮುದ್ರೆಯಾಗಿರುವ ಬಗ್ಗೆ ಸತ್ಯಾಪನಾ ಪ್ರಮಾಣ ಪತ್ರವನ್ನು ವ್ಯಾಪಾರ ಸ್ಥಳಗಳಲ್ಲಿ ಕಡ್ಡಾಯವಾಗಿ ಪ್ರದರ್ಶಿಸಬೇಕಾಗಿರುತ್ತದೆ. ಆಗಿಂದಾಗ್ಗೆ ಚಿನ್ನ, ಬೆಳ್ಳಿ ಅಂಗಡಿಗಳನ್ನು ತಪಾಸಣೆ ಮಾಡಲಾಗುತ್ತಿದೆ. ಒಂದು ವೇಳೆ ಉಲ್ಲಂಘನೆ ಕಂಡು ಬಂದಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ. |
| (ಇ) | ವಂಚನೆಗಳಿಗೆ ಒಳಗಾಗಿರುವ ಪ್ರಕರಣಗಳ ದಾಖಲಾತಿ ಸಂಖ್ಯೆ ಎಷ್ಟು; ಇಂತಹ ಪ್ರಕರಣಗಳನ್ನು ಪತ್ತೆ ಹಚ್ಚಿ, ಇಲ್ಲಿಯವರೆಗೆ ಎಷ್ಟು ಇಲ್ಲಿಯವರೆಗೆ ಎಷ್ಟು ಮಳಿಗೆಗಳ ಮೇಲೆ ಸರ್ಕಾರವು ಕಾನೂನು ಕ್ರಮ ಕೈಗೊಂಡಿದೆ? (ಸಂಪೂರ್ಣ ವಿವರ ನೀಡುವುದು) | ವಂಚನೆಗಳಿಗೆ ಒಳಗಾಗಿರುವ ಪ್ರಕರಣಗಳಿಗೆ ಸಂಬಂಧಿಸಿದಂತೆ ಒಟ್ಟು 41 ಪ್ರಕರಣಗಳು ~~ಗ್ರಾಹಕರ ಆಯೋಗದಲ್ಲಿ~~ ದಾಖಲಾಗಿರುತ್ತವೆ.<br>ಕಾನೂನು ಮಾಪನಶಾಸ್ತ್ರ ಇಲಾಖೆಯ ಕ್ಷೇತ್ರಾಧಿಕಾರಿಗಳು ವ್ಯಾಪಾರ ಸ್ಥಳಗಳಿಗೆ ಅನಿರೀಕ್ಷಿತವಾಗಿ ಅಥವಾ ದೂರಿನ ಮೇರೆಗೆ ತಪಾಸಣೆ ನಡೆಸಿ ಉಲ್ಲಂಘನೆ ಕಂಡು ಬಂದಲ್ಲಿ ನಿಯಮಾನುಸಾರ ಮೊಕದ್ದಮೆ ದಾಖಲಿಸಿ ಕ್ರಮ ಕೈಗೊಳ್ಳಲಾಗುತ್ತಿದೆ.<br>ನಿಯಮಗಳು ಜಾರಿ ಆದಾಗಿನಿಂದ ದಾಖಲಾದ ಪ್ರಕರಣಗಳ ವಿವರ ಈ ಕೆಳಕಂಡಂತಿದೆ. |

| ವರ್ಷ | ತಪಾಸಣೆ | ಹೂಡಿದ ಮೊಕದ್ದಮೆ | ವಸೂಲಾದ ದಂಡ |
|---|---|---|---|
| 2017-18 | 1908 | 786 | 6,43,000 |
| 2018-19 | 3908 | 1046 | 9,72,000 |
| 2019-20 | 3614 | 1027 | 12,21,000 |

ಆನಾಸ 19 ಕಾಮಾಸೇ 2020 (ಇ-ಆಫೀಸ್)

(ಕೆ. ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.